ನವಸಾಕ್ಷರ ಪುಸ್ತಕ ಮಾಲೆ ೫೨

# ಕಾಡುಗಿಳಿಗೊಂದು ಪಾಠಶಾಲೆ

ತಿರುಮಲ ಮಾವಿನಕುಳಿ







ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಲೋಕಶಿಕ್ಷಣ ನಿರ್ದೇಶನಾಲಯ
ನವಸಾಕ್ಷರ ಪುಸ್ತಕ ಮಾಲೆ—೫೨

# ಕಾಡುಗಿಳಿಗೊಂದು ಪಾಠಶಾಲೆ

ತಿರುಮಲ ಮಾವಿನಕುಳಿ






ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ—೫೮೩ ೨೭೭

**KADUGILIGONDU PATHASHALE :** By Tirumala Maavinakuli. Published by The Director of Prasaranga, Kannada University, Hampi – 583 211, KARNATAKA.
First Impression 1994, Pp. ii + 26, Rs. 8.00

---





**ಸಂಯೋಜನಾಧಿಕಾರಿ**
ಎಚ್.ಎಸ್.ಶ್ರೀಮತಿ
ಪಠ್ಯಪುಸ್ತಕ ರಚನಾ ವಿಭಾಗ

**ಪ್ರಕಾಶಕರು**
ನಿರ್ದೇಶಕರು
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ—೫೮೩ ೨೧೧

**ಮುಖಪುಟ ವಿನ್ಯಾಸ**
ಕೆ. ಮಕಾಳಿ

**ಬೆಲೆ: ರೂ ೮.೦೦**

ಮುದ್ರಕರು
ಅಭಿಮಾನಿ ಪ್ರಕಾಶನ
೯೬, ಡಾ.ರಾಜಕುಮಾರ್ ರಸ್ತೆ,
ರಾಜಾಜಿನಗರ,
ಬೆಂಗಳೂರು—೫೬೦ ೦೨೧



# ಕಾಡುಗಿಳಿಗೊಂದು ಶಾಲೆ

ಮಲೆನಾಡಿನ ಚಳಿಗಾಲ. ಒಂದು ರಾತ್ರಿ. ಅಟ್ಟದ ಅಡಿಯಲ್ಲಿ ಸಂತೆ. ಊರ ಮಕ್ಕಳಿಗೆಲ್ಲ ಅಡಿಕೆ ಸುಲಿಯುವ ಆತುರ. ಚಿಮಣಿ ಬುಡ್ಡಿ ಅಲ್ಲಲ್ಲಿ ಮಿಂಚು ಹುಳದ ಹಾಗೆ ಮಿನುಗುತ್ತಿತ್ತು. ಅಡಿಕೆ ಸುಲಿಯುವವರನ್ನು ನೋಡುತ್ತಾ ಕುಳಿತಿದ್ದ ಮನೆಮಕ್ಕಳು ಚಳಿಗೆ ಗಡಗಡ ನಡುಗುತ್ತಿದ್ದರು. ಹಲ್ಲು ಕಟಕಟ ಹೊಡೆದುಕೊಳ್ಳುತ್ತಿತ್ತು.

ಅಮ್ಮ ಅಲ್ಲೇ ಹೊಡಚಲು ಬಳಿ ಕಾಲು ನೀಡಿಕೊಂಡು ಕುಳಿತಿದ್ದಳು. ಥರ ಥರ ನಡುಗುತ್ತಿದ್ದ ಮಕ್ಕಳನ್ನು ಕಂಡು.

'ಚಳಿ ಚಳಿ ನಡುಕ
ಮಕ್ಕಳ ಕೊರಳಿಗೆ ಪದಕ'' ಎಂದು ಹಾಡು ಗುನುಗುತ್ತಿದ್ದಳು.

ಮುಂಜಾನೆ ಶಾಲೆಗೆ ಹೋಗಬೇಕಾದ್ದರಿಂದ ಮಕ್ಕಳನ್ನು ''ಬೇಗ ಮಲಗ್ರೋ'' ಎಂದು ಒತ್ತಾಯಿಸತೊಡಗಿದ್ದಳು. ಅಷ್ಟು ಹೇಳುವುದೇ ತಡ ಮಕ್ಕಳೆಲ್ಲ



ರಾಜನ ಉದ್ಯಾನ

''ಕಥೆ-ಹೇಳುವುದಾದರೆ ಒಳಗೆ ಬಂದು ಮಲಗ್ತೇವೆ'' ಎಂದು ದುಂಬಾಲು ಬಿದ್ದರು. ಬೆಂಕಿಕಡ್ಡಿಯಿಂದ ಕಿವಿ ಗುಗ್ಗೆ ತೆಗೆಯುತ್ತಿದ್ದ ಅಮ್ಮ ತನ್ನ ಬಚ್ಚಬಾಯಲ್ಲಿ 'ಹಾಗೆಯೇ ಆಗಲಿ' ಎಂದಾಗ ಮಕ್ಕಳ ಆನಂದಕ್ಕೆ ಪಾರವೇ ಇಲ್ಲ. ಅಮ್ಮನೂ ಅಷ್ಟೇ ಸಡಗರದಿಂದ ಗಂಟಲು ಸರಿಪಡಿಸಿಕೊಂಡು ಕಥೆ ಹೇಳತೊಡಗಿದಳು.

೧

ಒಂದಲ್ಲ ಒಂದೂರು. ವಾಚಾಳಪುರ, ವಾಚಾಳಪುರ ಅಂತ ಅದರ ಹೆಸರು. ಅಲ್ಲೊಬ್ಬ ರಾಜನಿದ್ದ. ಅರಮನೆಯಲ್ಲಿ ಸುರೂಪಿಯಾದ ರಾಜಕುಮಾರಿ, ಅವಳಿಗೆ ಅನುರೂಪನಾದ ಗಂಡ- ಹೀಗೆ ಎಲ್ಲರೂ ಸುಖಸಂಕಥಾ ವಿನೋದದಿಂದ ಕಾಲ ಕಳೆಯುತ್ತಿದ್ದರು.

ಅರಮನೆಯ ಸಮೀಪದಲ್ಲೇ ಒಂದು ಹಸಿರು ವನ ಇತ್ತು. ರಾಜನೇ ವಿಹಾರಕ್ಕಾಗಿ ಅದನ್ನು ರೂಪಿಸಿದ್ದ.'ರಾಜನ ತೋಟ' ಎಂದೇ ಅದನ್ನು ಕರೆಯುತ್ತಿದ್ದರು. ಬಗೆಬಗೆಯ ಹೂಬಳ್ಳಿಗಳು, ತಿಳಿ ನೀರಿನ ಕೊಳ, ಅರಳಿ ನಿಂತ ತಾವರೆ-ಎಲ್ಲವೂ ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತಿದ್ದವು. ಅದು ದೇವೇಂದ್ರನ ನಂದನವನದಂತೆ ನಳನಳಿಸುತ್ತಿತ್ತು. ಹಸಿರು ಸೀರೆ ಉಟ್ಟುಕೊಂಡಂತೆ ಕಂಗೊಳಿಸುತ್ತಿತ್ತು. ಮಳೆಗಾಲದಲ್ಲಿ ಮಿಂದುಕೊಂಡು, ಚಳಿಗಾಲದಲ್ಲಿ ಮುದುಡಿಕೊಂಡು, ವಸಂತದಲ್ಲಿ ಉಲ್ಲಾಸದಿಂದ ಕುಣಿಯುತ್ತಿತ್ತು.

ತುಂಬಿ ತುಳುಕುತ್ತಿದ್ದ ಹಸಿರು ವನ ಶಾಂತಿಯ ತಾಣವೇ ಸರಿ. ರಾಜನಿಗಷ್ಟೇ ಅಲ್ಲ. ಸಕಲ ಪರಿವಾರದವರಿಗೂ. ನೂರಾರು ಬಗೆಯ ಹಕ್ಕಿಗಳ ಕಲರವದಿಂದ ಮನಸ್ಸಿಗೆ ಮುದ. ಅವುಗಳಿಗೆ ಆಹಾರ ನೀಡುವ ಹಣ್ಣಿನ ಮರಗಳೆಲ್ಲ ಕೈಬೀಸಿ ಕರೆಯುವಂತೆ ಇದ್ದವು.

ಸುತ್ತಲಿನ ಪ್ರದೇಶವೆಲ್ಲ ಕಾಡಿನಿಂದ ಕೂಡಿತ್ತು. ಗಿಳಿ ಹಿಂಡುಗಳೂ ಸಹ ಅಲ್ಲಿ ಗೂಡು ಕಟ್ಟಿಕೊಂಡು ವಾಸವಾಗಿದ್ದವು. ನಸುಕಿನಲ್ಲಿಯೇ ನಿತ್ಯದಂತೆ ಯಾತ್ರೆ



ಕಾವಲುಗಾರರು ಗಿಳಿಯನ್ನು ಪಂಜರದಲ್ಲಿ ಹಿಡಿದಿರುವುದು.

ಹೊರಟಿದ್ದವು. ಹಾರುತ್ತಾ, ಇಳಿಯುತ್ತಾ, ಹಾಡುತ್ತಾ ಬರುತ್ತಿದ್ದ ಗಿಳಿಗಳ ನೋಟವೇ ಸೊಗಸು. ರಾಜನ ತೋಟದ ಸಿರಿವಂತಿಕೆ ಕಂಡು ಅವುಗಳಿಗೆಲ್ಲ ಎಲ್ಲಿಲ್ಲದ ಸಂತಸ. ಕೊಳದಲ್ಲಿ ನೀರು ಕುಡಿದವು, ಮರದ ಟೊಂಗೆಗಳ ಮೇಲೆ ಜಿಗಿದವು. ಮಟ್ಟಿಗಳಲ್ಲಿ ಕುಪ್ಪಳಿಸಿದವು. 'ಟುವ್ವೀ ಟುವ್ವೀ' ಎಂದು ಇನಿದನಿ ಹೊರಡಿಸುತ್ತಾ ಮೈಮರೆತವು. ಸಂಜೆವರೆಗೂ ಹೀಗೆ. ಸಮಯ ಕಳೆದದ್ದೇ ಗೊತ್ತಾಗಲಿಲ್ಲ. ಹೊಟ್ಟೆ ಬಿರಿ ತಿಂದವು. ಗೂಡಲ್ಲಿರುವ ಮರಿಗಳಿಗೆಂದು ಕೊಕ್ಕಿನಲ್ಲಿ ಒಂದಿಷ್ಟು ಹಣ್ಣು ಕಚ್ಚಿಕೊಂಡು ಮರಳಿ ಹೊರಟವು.

ಇದ್ದಕ್ಕಿದ್ದಂತೆ ಆಸುಪಾಸಿನ ಮರಗಳಲ್ಲಿದ್ದ ಗಿಳಿಮರಿಗಳಲ್ಲಿ ಒಂದು ಸಂತೋಷದಿಂದ ಕೂಗತೊಡಗಿತು. ಸಿಹಿಹಣ್ಣಿನಿಂದ ತೂಗಿ ಬಾಗಿದ ಗಿಡವನ್ನು ಕಂಡಿದ್ದೇ ಅದಕ್ಕೆ ಕಾರಣ. ಅದು ಹುಚ್ಚೆದ್ದು ''ಬನ್ನಿ ಬನ್ನಿ, ಸಿಹಿಹಣ್ಣು ತಿನ್ನಿ, ಬೇಗನೆ ಹಾರಿ ಬನ್ನಿರೋ'' ಎಂದು ಒಂದೇ ಸವನೆ ಚೀರುತ್ತಾ ಗುಲ್ಲೆಬ್ಬಿಸಿತು.

ರಾಜನ ಹಸಿರು ತೋಟವನ್ನು ಕಾಯಲು ಕಾವಲುಗಾರರು ನೇಮಕವಾಗಿದ್ದರು. ಅವರಾದರೋ ಶುದ್ಧ ಸೋಮಾರಿಗಳು. ತೂಕಡಿಸುತ್ತಿದ್ದರು. ಇತ್ತ ಕಡೆ ಪರಿವೆಯೇ ಇರಲಿಲ್ಲ ಅವರಿಗೆ. ಗಿಳಿಮರಿಗಳ ರಂಪಾಟದಿಂದಲೇ ಅವರಿಗೆ ಎಚ್ಚರ. ದಿಢೀರನೆ ಎದ್ದು ಓಡೋಡಿ ಬಂದರು. ಕೋಲಿನಿಂದ ನೆಲ ಕುಟ್ಟುತ್ತ ಬೆದರಿಸತೊಡಗಿದರು. ಕಾವಲುಗಾರರ ಅಬ್ಬರ ಹೆಚ್ಚಾಯಿತು. ಕೋಮಲ ಸ್ವಭಾವದ ಗಿಳಿ ಬಳಗವೆಲ್ಲ ಹೆದರಿದವು. ಎತ್ತೆಂದರತ್ತ ಹಾರಿ ಹೋಗತೊಡಗಿದವು.

ಪ್ರಾಣಕ್ಕಿಂತ ಪ್ರಿಯಕರವಾದದ್ದು ಇನ್ನಾವುದಿದೆ ಹೇಳಿ?

ಕಾವಲುಗಾರರು ದಣಿದು ಯಥಾಪ್ರಕಾರ ನಿದುಸಿರು ಬಿಟ್ಟರು. ಮರಗಳಿಗೆ ಒರಗಿಕೊಂಡರು.

ಪಾಪ! ಒಂದು ಗಿಳಿಮರಿಗೆ ರೆಕ್ಕೆ ಬಲಿತಿರಲಿಲ್ಲ. ಹಣ್ಣಿನ ರುಚಿಗೆ ಮನಸೋತಿತ್ತು. ತನ್ನಷ್ಟಕ್ಕೆ ತಾನು ಕುಕ್ಕಿ ಕುಕ್ಕಿ ಹಣ್ಣು ಮೆಲ್ಲುತ್ತಿತ್ತು. ಮೊದಲೇ ಮಾತು

ಬಾರದು. ಮನುಷ್ಯರಂತೆ ಸ್ವಾರ್ಥಿಯಲ್ಲ. ಬಂಧು ಬಳಗವನ್ನೆಲ್ಲ ಕೂಗಿಕೂಗಿ ಕರೆಯತೊಡಗಿತು.

''ಅಣ್ಣ, ಅಮ್ಮ, ಬನ್ನಿ ಬನ್ನಿ, ಟೇಂ.... ಟೇಂ.... ಚಿಕ್ಕಪ್ಪ, ದೊಡ್ಡಪ್ಪ, ಹಣ್ಣುತಿನ್ನಿ ಟೇಂ... ಟೇಂ.... ಎಲ್ಲಾಹಣ್ಣು ನಮ್ಮದೇ....''

ಕಾವಲುಗಾರರು ಕವಳ ಜಗಿಯುತ್ತಾ ಉಗುಳುತ್ತಾ ಕೂತಿದ್ದರು. ಮತ್ತೆ ಗಿಳಿಯ ಚೀರಾಟ ಕೇಳಿಸತೊಡಗಿತು. 'ಪಟ್ಟಾಂಗ' ನಿಲ್ಲಿಸಿದರು. ಕವಳದ ಸಂಚಿ ಎಸೆದರು. ಬಿದ್ದೆವೋ ಎದ್ದೆವೋ ಎಂಬಂತೆ ಓಡಿ ಬಂದರು. ಚೀರುತ್ತಿದ್ದ ಗಿಳಿಮರಿ ಪತ್ತೆಯಾಯಿತು. ನೋಡ ನೋಡುತ್ತಿದ್ದಂತೆ 'ಕಳ್ಳ..... ಕಳ್ಳ.... ಕಳ್ಳ, ಓಡು... ಹಿಡಿ... ಹಿಡಿ... ಹಿಡಿ' ಎಂದು ಅರಚುತ್ತಾ ಸುತ್ತುವರೆದರು.

ಕಾವಲುಗಾರರಲ್ಲಿ ಒಬ್ಬ ದನಿಯೇರಿಸಿದನು.

''ಏನಲೇ, ಗಿಳಿಪಿಳ್ಳೆ, ನಮ್ಮ ರಾಜ ಸಾವಿರ ಕುದುರೆಯ ಸರದಾರ. ಈ ತೋಟ ಅವನದು. ನಿನ್ನಪ್ಪಂದಲ್ಲ.''

ಮತ್ತೊಬ್ಬ ಕಾವಲುಗಾರನೂ ಸುಮ್ಮನಿರಲಿಲ್ಲ.

''ಈ ಹಣ್ಣು ನಿನ್ನಜ್ಜಂದಲ್ಲ. ನಮ್ಮ ರಾಜಂದು. ತಿನ್ನೋದು ನಿಲ್ಲಿಸು. ಇಲ್ಲದಿದ್ರೆ ರೆಕ್ಕೆ ಪುಕ್ಕ ಕಿತ್ತು ಹಾಕಿಬಿಡ್ತೇನೆ ಕಣಲೇ'', ಎಂದು ಅಟಕಾಯಿಸತೊಡಗಿದನು.

ಗಿಳಿಮರಿ ಮಾತ್ರ ಇವರನ್ನು ಲೆಕ್ಕಿಸಲೇ ಇಲ್ಲ. ಹಿಂದಿನಂತೆ ''ಬನ್ನಿರೋ, ಹಣ್ಣು ನಮ್ಮದೇ, ತಿನ್ನುವವರದ್ದೇ ತೋಟ, ಬೇಗನೆ ಬನ್ರೋ'' ಎಂದು ಒಂದೇ ಸಮನೆ ಕರೆಯ ಹತ್ತಿತು.

ಚಿಕ್ಕದೊಂದು ಗಿಳಿಮರಿಯೂ ನಮಗೆ ಹೆದರುವುದಿಲ್ಲವಲ್ಲ. ಕಾವಲುಗಾರರಿಗೆ ಅವಮಾನ ಎನ್ನಿಸಿತು. ಸಹಿಸಲಾಗಲಿಲ್ಲ. ಮೈಯೆಲ್ಲ ಪರಚಿಕೊಂಡರು. ನಿಂತಲ್ಲಿ ನಿಲ್ಲಲಾರದೆ ಕುದಿಯತೊಡಗಿದರು.

ಕೊನೆಗೆ ತೀರ್ಮಾನಕ್ಕೆ ಬಂದವರಂತೆ,

''ಏಯ್ ಗಿಳಿಪಿಳ್ಳೆ, ನಿನಗೆ ರಾಜನ ಭಯವೇ ಇಲ್ಲ. ನಮ್ಮ ಭಯವೂ ಇಲ್ಲ. ಹೋಗಲಿ, ಕೋಲಿನ ಭಯವೂ ಇಲ್ಲವಲ್ಲೋ'' ಎಂದು ಕೆಂಡ ಕಾರಿದರು. ನಿಮಿಷದಲ್ಲಿ ಬಲೆಬೀಸಿ ಗಿಳಿಮರಿಯನ್ನು ಗಬಕ್ಕನೆ ಹಿಡಿದೇ ಬಿಟ್ಟರು.

೨

ವಾಚಾಳಪುರದ ರಾಜನಿಗೆ ಗಿಡ ಮರ ಪಕ್ಷಿ ಪ್ರಾಣಿಗಳೆಂದರೆ ಪಂಚಪ್ರಾಣ. ಆತ ಎಂದಿನಂತೆ ಆಸ್ಥಾನದ ಕಡೆ ಬರತೊಡಗಿದನು. ಹೊಗಳುಭಟರೆಲ್ಲ ''ರಾಜಾ, ಅಮರ ತೇಜ ವಿದ್ಯಾ ಗುಣ ಸಂಪನ್ನ'' ಎಂದು'ಭೋ ಪರಾಕ್' ಕೂಗಿದರು. ರಾಜ ಎಂದ ಮೇಲೆ ಒಬ್ಬನೇ ಬರಲು ಸಾಧ್ಯವೇ? ಜೊತೆಗೆ ಮಂತ್ರಿ ಮತ್ತು ಅಳಿಯ ಕೂಡ ಬಂದರು.

ಸಂಪ್ರದಾಯದಂತೆ ರಾಜ ಸಿಂಹಾಸನದಲ್ಲಿ ವಿರಾಜಮಾನನಾಗಿದ್ದ. ಕಾಣಿಕೆಗಳನ್ನು ಒಪ್ಪಿಸಿಕೊಳ್ಳುತ್ತಿದ್ದ. ಅಷ್ಟರಲ್ಲಿಯೇ ವನಪಾಲಕರು ಬಂದರು.

''ಮಹಾರಾಜರಿಗೆ ಜಯವಾಗಲಿ''.

''ಸ್ವಾಮಿ, ನಿನ್ನೆಯ ದಿನ ರಾಜವನದಲ್ಲಿ ಲೂಟಿಯಾಗಿದೆ. ಹಾಗೆ ಲೂಟಿ ಮಾಡುತ್ತಿದ್ದ ಗಿಳಿಮರಿಯನ್ನು ಇದೋ ಹಿಡಿದು ತಂದಿದ್ದೇವೆ. ದಯಮಾಡಿ ನೋಟ ಹರಿಸಬೇಕು....''

ಮಾತು ಮುಗಿದಿರಲಿಲ್ಲ. ಅಷ್ಟರಲ್ಲಿಯೇ ಅಚಾನಕ್ಕಾಗಿ ಗಿಳಿಮರಿ ''ಟೇಂ.... ಟೇಂ'' ಎಂದು ಒದರತೊಡಗಿತು. ರಾಜ ಚಕಿತಗೊಂಡ. ಗಿಳಿಮರಿಯ ಚೀರಾಟದ ಭಾಷೆ ಅರ್ಥವಾಗದೆ ಪೇಚಿಗೆ ಸಿಲುಕಿದ.

ಅದು ಯಾವ ಭಾಷೆ ಎಂದು ರಾಜ ಗೊಂದಲಗೊಂಡ. ಬಗೆಹರಿಯದೆ ಮಂತ್ರಿಯ ಕಡೆಗೆ ಕೇಳುವಂತೆ ನೋಡಿದ.

ಮತ್ತೆ ಅದೇ ಕರುಣಾಜನಕ ದನಿ. 'ಟೇಂ... ಟೇಂ...' ಮಂತ್ರಿ ಅರಸನ ಮನಸ್ಸನ್ನು ಅರಿತುಕೊಂಡ. ಗಿಳಿಮರಿಯ ಕತೆಯನ್ನು ವಿವರಿಸುತ್ತಾ ಹೋದ.

''ಮಹಾರಾಜಾಧಿರಾಜ, ಇದನ್ನು 'ಗಿಳಿಮರಿ' ಎನ್ನುತ್ತಾರೆ. ಕಾಡಿನಲ್ಲೇ ಇದರ ಹುಟ್ಟು-ಬದುಕು. ನಾಗರಿಕತೆಯ ಸೋಂಕಿಲ್ಲ. ವಸಂತ ಕಾಲಮಾನದ ಅಮಲಿನಿಂದ ಅದು ಮರುಳಾಗಿದೆ. ಆದ್ದರಿಂದ ನಮ್ಮ ರಾಜವನಕ್ಕೆ ದಾಳಿ ಇಟ್ಟಿದೆ. ಹಣ್ಣುಗಳನ್ನೆಲ್ಲ ತಿಂದು ತೇಗಿದೆ''.

ರಾಜನಿಗೆ ಕುತೂಹಲ ಕೆರಳಿತು. ಪ್ರಶ್ನೆಗಳನ್ನು ಎಸೆಯುತ್ತಾ ಹೋದ. ಮಂತ್ರಿ ಉತ್ತರಿಸುತ್ತಾ ಹೋದ.

''ಇದಕ್ಕೂ ಮಾತನಾಡಲು ಬರುತ್ತದೆಯೇ?''

''ಇಲ್ಲ''

''ಹಾಡುವುದಕ್ಕೆ.....?''

''ಇಲ್ಲ''

''ಮನುಷ್ಯರಂತೆ ಕುಣಿಯಲು ಬರುವುದೇ?''

''ಇಲ್ಲ''

''ಶಾಸ್ತ್ರ, ಪುರಾಣ, ವ್ಯಾಕರಣ?''

''ಇಲ್ಲ.... ಇಲ್ಲ..... ಇಲ್ಲ.....''

''ಛೆ! ಹಾಗಾದರೆ ನಮ್ಮ 'ಅಕ್ಷರತುಂಗಾ' ಶಾಲೆಯವರು ಕೈಕಟ್ಟಿ ಕುಳಿತಿದ್ದಾರೆಯೇ?''

ಮಂತ್ರಿಗೆ ಮುಜುಗರವಾಯಿತು. ಧರ್ಮಸಂಕಟ. ಆದರೂ ಸುಧಾರಿಸಿಕೊಂಡು ನುಡಿದ.

''ಇಲ್ಲ ಪ್ರಭು. ಇದು ನಾಡವಾಸಿ ಅಲ್ಲ, ಕಾಡುವಾಸಿ. ಹಾಗಾಗಿ ಎದೆ ಸೀಳಿದರೆ ಒಂದಕ್ಷರವೂ ಕಾಣದು. ಇನ್ನು ಗದ್ಯ-ಪದ್ಯ, ಸಂಗೀತ, ಗಣಿತ ದೂರವೇ ಉಳಿಯಿತು. ಅದಕ್ಕೆ ಗೊತ್ತಿರುವುದು ಒಂದೇ ಕೆಲಸ. ಕಂಡ ಕಂಡ ಗಿಡಮರಗಳನ್ನು ಏರಿ ಹಣ್ಣು ತಿಂದು, ಉದುರಿಸಿ ಹಾಳು ಮಾಡೋದು. ಆ ನಂತರ....''

''ಟೇಂ.... ಟೇಂ.....''

ಸಾರಾಸಗಟಾಗಿ ಗಿಳಿಯ ಕತೆಯನ್ನೆಲ್ಲಾ ಮಂತ್ರಿಯಿಂದ ತಿಳಿದ ಬಳಿಕ ರಾಜನಿಗೆ ಕನಿಕರವಾಯಿತು.

''ಪಾಪ, ಅಯ್ಯೋ ಪಾಪ!''ಅಂದ.

ಸಹಾನುಭೂತಿಯ ಜೊತೆಗೆ ರಾಜನಿಗೆ ಅಸಮಾಧಾನವೂ ಆಯಿತು. ಸಭಾಸದರಿಗೆಲ್ಲ ಕೇಳಿಸುವಂತೆ ತನಗಾದ ಬೇಸರವನ್ನು ತೋಡಿಕೊಂಡ.

''ಛೆ!ಛೆ! ಇದೆಂತಹ ವಿರೋಧಾಭಾಸ! ನಮ್ಮ ರಾಜ್ಯದಲ್ಲಿ ಮುದುಕರೂ ಕೂಡ ಅಕ್ಷರ ಕಲಿತ ಉದಾಹರಣೆಗಳಿರುವಾಗ 'ಈ ಮರಿ'ಗೆ ಅಕ್ಷರ ಬರುವುದಿಲ್ಲವೆಂದರೆ

ಛೆ! ಏನರ್ಥ? ಅದರಲ್ಲೂ ಅಕ್ಷರ ಅರಿಯದ ಹಕ್ಕಿಯೊಂದು ಅರಮನೆಯ ವನಕ್ಕೆ ಬಂದು ಹಣ್ಣು ಕೀಳುತ್ತದೆ ಎನ್ನಲು ನಿಮಗೆ ನಾಚಿಕೆಯಾಗುವುದಿಲ್ಲವೇ? ಏಳಿರಿ, ಕೂಡಲೇ ಈ ಅನಾಗರೀಕ ಹಕ್ಕಿಯನ್ನು ರಾಜಶಾಲೆಗೆ ಸೇರಿಸಿ. ಆಸ್ಥಾನಪಂಡಿತರು ಇದಕ್ಕಾದರೂ ವಿದ್ಯಾ ಬುದ್ಧಿ ಕಲಿಸಲಿ. ಹಳೆಯ ಕಾಡು ನಡಾವಳಿಯೆಲ್ಲ ಮಾಯವಾಗಲಿ. ಈ ಗಿಳಿಮರಿ ಹೊಸ ಚಿಗುರಿನಂತೆ ನೂತನ ಸದಾಚಾರಗಳಿಂದ ಕಂಗೊಳಿಸಲಿ. ಸರ್ವಾಂಗ ಸುಂದರವಾಗಿ ಅರಳಲಿ''.

ಸಭೆ ಗಂಭೀರವಾಯಿತು. ಅರಸನ ಆದೇಶವನ್ನು ಪರಿಪಾಲಿಸಲು ಮಂತ್ರಿ ಸಿದ್ಧನಾದ. ರಾಜ ಮತ್ತೊಂದು ಮಾತು ಸೇರಿಸಿದ.

''ಮಂತ್ರಿಗಳೇ, ಹೇಳಿ ಕೇಳಿ ಇದು ಗಿಳಿಮರಿ. ಇದಕ್ಕೆ ಆಧುನಿಕ ಶಿಕ್ಷಣ ದೊರೆತರೆ ಇಡಿಯ ಕಾಡಿಗೆ ಕಾಡೇ ಕಲಿಕೆಯ ಆಗರವಾಗುತ್ತದೆಯಲ್ಲವೇ?''

ತನ್ನದೂ ಒಂದು ಸಲಹೆ ಜೊತೆಗೆ ಇರಲಿ ಎಂದು ಅಲ್ಲೇ ಕುಳಿತಿದ್ದ ಅಳಿಯ ದೇವರು ಮಧ್ಯೆ ಬಾಯಿ ಹಾಕಿದ.

''ಮಹಾರಾಜ, ರಾಜ ಮಾವಯ್ಯ, ನನ್ನ ಪ್ರಕಾರ ಏಕಾಏಕಿ ಶಾಲೆಗೆ ಸೇರಿಸುವುದು ಉಚಿತವಲ್ಲ. ಹಕ್ಕಿಯ ಆಚಾರ-ವಿಚಾರ, ಆಹಾರ-ವಿಹಾರ-ವ್ಯವಹಾರ, ಬೆಳೆದು ಬಂದ ಪರಿಸರ, ಅದರ ಒಡನಾಡಿಗಳು-ಎಲ್ಲ, ಎಲ್ಲವೂ ಚಾಚೂ ಬಿಡದ ಹಾಗೆ ದೀರ್ಘ ಸಂಶೋಧನೆಗೆ ಒಳಪಡಬೇಕು.

ಅಳಿಯದೇವರ ಮಾತಿನ ಮೋಡಿಗೆ ಮಂತ್ರಿ ಬಲಿಬಿದ್ದ. ಅಳಿಯಂದಿರನ್ನು ''ಪ್ರಾಣಿ ಮತ್ತು ಪಕ್ಷಿಗಳ ಬಗ್ಗೆ ಚೆನ್ನಾಗಿ ತಿಳಿದುಕೊಂಡಿದ್ದಾರೆ. ಗಿಳಿಗೆ ಪಾಠ ಕಲಿಸಲು ಇವರೇ ಲಾಯಕ್ಕು. ಗಿಳಿಯೂ ಪಾಠ ಕಲಿತಂತಾಗುತ್ತದೆ. ಅಳಿಯಂದಿರಿಗೂ ಒಂದು ಕೆಲಸ ಸಿಕ್ಕಂತಾಗುತ್ತದೆ. ಅಲ್ಲವೇ ಪ್ರಭೂ'' ಎಂದು ಮಂತ್ರಿ ಸೂಚಿಸಿದ. ತನ್ನ ಅಮೂಲ್ಯವಾದ ಸಲಹೆಗೆ ತಾನೇ ಸಡಗರಗೊಂಡ.



ಕಾವಲುಗಾರರು ಬೀದಿಯಲ್ಲಿ ಡಂಗುರ ಸಾರುತ್ತಿರುವುದು

ಅರಸನೂ ಸಂತೋಷಗೊಂಡ. ಗೆಲುವಿನಿಂದ ಚಪ್ಪಾಳೆ ತಟ್ಟಿದ.

''ಯಾರಲ್ಲಿ? ಯಾರಲ್ಲಿ?''

''ಕೂಡಲೇ ರಾಜ್ಯದ ಬೀದಿ ಬೀದಿಗಳಲ್ಲಿ ಡಂಗುರ ಸಾರಿಸಿ ಬಿಡಿ. ನಮ್ಮ ಅಳಿಯ ಇಂದಿನಿಂದಲೇ ಗಿಳಿ ವಿದ್ಯಾಮಂತ್ರಿ.

''ಕೇಳಿರಿ... ಕೇಳಿರಿ...''

ಡಂಗುರದ ಸದ್ದು ಎಲ್ಲೆಲ್ಲೂ ಮೊಳಗಿತು. ಅರಸನ ಆದೇಶ ಜಾರಿಯಾಯಿತು.

೩



ಕೋಳಿ ಕೂಗುವುದರೊಳಗೆ ಊರು ತುಂಬಾ ಸುದ್ದಿ. ಸುದ್ದಿಯೋ ಸುದ್ದಿ. ''ಊರಿದ್ದಲ್ಲಿ ಹೊಲಗೇರಿ'' ಇರಬೇಕಲ್ಲ. ಕೆಲವರಿಗೆ ಡಂಗುರದ ಸಮಾಚಾರದಿಂದ ಸಂತಸ. ಮತ್ತೆ ಕೆಲವರಿಗೆ ಅಸಮಾಧಾನ. ಹೊಗಳು ಭಟರೂ ಇರುವಂತೆ ತೆಗಳು ಭಟರೂ ಇದ್ದರು.

ಗಿಳಿಮರಿಗೂ ವಿದ್ಯೆ. ರಾಜನ ಬಾಳು ಸಾರ್ಥಕ. ಪ್ರಾಣಿ, ಪಕ್ಷಿ, ಹುಳು ಹುಪ್ಪಟೆ -ಹೀಗೆ ಸಕಲ ಜೀವರಾಶಿಗಳ ಮೇಲೂ ನಮ್ಮ ರಾಜನಿಗೆ ಬಹಳ ಗೌರವ, ಸಮಾನಭಾವ. ಗಿಳಿಮರಿ ವಿದ್ಯಾ ಬುದ್ಧಿ ಕಲಿತರೆ ಅದೆಷ್ಟು ಚೆನ್ನ. ಗಿಳಿಮರಿ ಪಂಡಿತನಾದರೆ ರಾಜ್ಯಕ್ಕೇ ಒಳ್ಳೆಯದು. ಅಂತೂ ಇಂತಹ ರಾಜನನ್ನು ಪಡೆದ ನಾವೇ ಧನ್ಯ- ಎಂದೆಲ್ಲ ಹೊಗಳುಭಟರು ರಾಜನನ್ನು ಕೊಂಡಾಡತೊಡಗಿದರು.

ತೆಗಳುಭಟರಿಗೆ ಇನ್ನೇನು ಕೆಲಸ? ತೆಗಳಲೇ ಬೇಕಲ್ಲ. ಸರಿ ಲೇವಡಿ ಮಾಡತೊಡಗಿದರು. ಅಯ್ಯೋ ದೇವರೇ, ಪ್ರಜೆಗಳಿಗೆ ವಿದ್ಯೆ ಕಲಿವ ಅವಕಾಶ ಇಲ್ಲವಾಯಿತಲ್ಲ. ಪ್ರಜೆಗಳು ಕ್ರಿಮಿಕೀಟ, ಪಕ್ಷಿಗಳಿಗಿಂತಲೂ ಕಡೆಯಾದರಲ್ಲ. ಹೀಗೆ ಪರಿ ಪರಿಯಾಗಿ ಅರಸನನ್ನು ನಿಂದಿಸುತ್ತಾ ತೆಗಳುಭಟರೆಲ್ಲ ಹೊಟ್ಟೆ ತುಂಬಿಸಿಕೊಂಡರು. ಎರಡೂ ಗುಂಪಿಗೆ ಸೇರಿದ ಹಿಂಬಾಲಕರೆಲ್ಲ ಒಬ್ಬರಿಗೊಬ್ಬರು ಹಂಗಿಸತೊಡಗಿದರು.

ಹೀಗಿರಲು ಅರಸ ಸಭೆ ಸೇರಿಸಿದನು. ಹೇಗಾದರೂ ಸರಿ. ಎಷ್ಟೇ ಖರ್ಚಾದರೂ ಸರಿ. ಒಟ್ಟಿನಲ್ಲಿ ಗಿಳಿಮರಿಗೆ ವಿದ್ಯೆ ಕಲಿಸಬೇಕೆಂಬಾಸೆ. ಅಳಿಯನಾದ ಶುಕ ವಿದ್ಯಾಮಂತ್ರಿ ಒಂದು ಕಡೆ, ಸಂಶೋಧಕರು, ಪಂಡಿತರೆಲ್ಲ ಮತ್ತೊಂದು ಕಡೆ ಕುಳಿತಿದ್ದಾರೆ.

ಗಂಭೀರವಾಗಿ ಸಭೆಯನ್ನೊಮ್ಮೆ ನೋಡಿದ ಅರಸ.

''ಪ್ರಾಣಿಗಳೇ! ಅಲ್ಲ ಅಲ್ಲ. ಪ್ರಾಣಿಶಾಸ್ತ್ರ ವಿಶಾರದರೇ, ನೀವೆಲ್ಲ ಪಂಡಿತರಿದ್ದೀರಿ, ಸಂಶೋಧಕರಿದ್ದೀರಿ. ನೀವೆಲ್ಲರೂ ಒಂದಾಗಿ ಗಿಳಿಮರಿಗೆ ವಿದ್ಯೆ ನೀಡಬೇಕು. ಅದರ ಅವಿದ್ಯೆಗೆ, ಕಾರಣವನ್ನು ಹುಡುಕಬೇಕು. ಅಷ್ಟೇ ಸಾಲದು, ಅದು ವಿದ್ಯೆ, ಬುದ್ಧಿ, ಭಾಷೆ ಕಲಿಯುವಂತಾಗಬೇಕು ಹುಡುಕಿರಿ ಉಪಾಯವನ್ನು'' ಎಂದ.

ಸಂಶೋಧಕರೆಲ್ಲ ''ಇದೇನು ಮಹಾ'' ಎಂದುಕೊಂಡರು. ಒಬ್ಬೊಬ್ಬರೂ ಒಂದೊಂದು ಉಪಾಯ ಸೂಚಿಸಿದರು. ಗಿಳಿಮರಿಯ ವಾಸದ ಜಾಗ, ಅದರ ಸಹವಾಸ, ಆಹಾರ, ಪರಿಸರ, ಅಂಗಾಂಗಗಳ ರಚನೆ, ಅದು ಬಳಸುವ ಭಾಷೆ, ಹೀಗೆ ಪ್ರತಿಯೊಂದನ್ನೂ ಎಳೆಎಳೆಯಾಗಿ ಶೋಧಿಸಬೇಕೆಂದು ಹೇಳಿದರು.

ಗಿಳಿ ವಿದ್ಯಾಮಂತ್ರಿಗಳು ಕೆಲಸ ಆರಂಭಿಸಿದರು. ಅವರ ಆದೇಶದ ಮೇರೆಗೆ ಗಿಳಿಮರಿ ಇರುವ ಗೂಡನ್ನು ತಂದಿಡಲಾಯಿತು. ನೆರೆದ ಸಂಶೋಧಕರೆಲ್ಲಾ ನೋಡತೊಡಗಿದರು. ಹೇಗೆ ನಿಂತರೂ ಸರಿಯಾಗಲಿಲ್ಲ. ಕೊನೆಗೆ ಹೇಗೆ-ಹೇಗೋ ನಿಂತು ಗೂಡನ್ನೇ ನಿಟ್ಟಿಸಿ ನೋಡಿದರು. ಬೇರೆ ಬೇರೆ ಮೂಲೆಗಳಿಂದ ನೋಡಿದಂತೆಲ್ಲ ನಿಧಾನವಾಗಿ ಒಂದೊಂದೇ ಅಂಶ ಬೆಳಕಿಗೆ ಬರತೊಡಗಿತು. ಸಂಶೋಧಕರೆಲ್ಲ ಗೊಣಗುಟ್ಟಿದರು.

''ಗೂಡಿಗೆ ಗೂಡೇ ದೋಷಯುತವಾಗಿದೆ. ಅದನ್ನು ಕಟ್ಟಲು ಬಳಸಿರುವ ವಸ್ತುಗಳೆಲ್ಲ ಕಾಡಿನವೇ. ಅದು ತಿನ್ನುವ ಕಾಳುಕಡ್ಡಿಗಳೂ ಕಾಡಿಗೇ ಸೇರಿದ್ದು. ಗೂಡಿನ ಅಳತೆ ಆಕಾರಗಳೂ ಸರಿಯಾಗಿಲ್ಲ. ಆದ್ದರಿಂದಲೇ ಗಿಳಿ ನಾಗರಿಕವಾಗಿಲ್ಲ. ಇಂತಹ ಪರಿಸರದಲ್ಲಿ ಯಾರು ತಾನೇ ನಾಗರಿಕರಾಗಲು ಸಾಧ್ಯ?''.

ಸಂಶೋಧಕರ ಮಾತುಗಳನ್ನೆಲ್ಲ ಮಂತ್ರಿ ಕೇಳಿಸಿಕೊಂಡ. ''ಎಲ್ಲರೂ ಕಾರಣಗಳನ್ನು ಹೇಳುತ್ತೀರಿ. ಆದರೆ ಯಾರೂ ಪರಿಹಾರ ಹೇಳುತ್ತಿಲ್ಲವಲ್ಲ'' ಎಂದು ಸಂಶೋಧಕರನ್ನೆಲ್ಲ ಕೆಣಕಿದ. ಒಬ್ಬೊಬ್ಬರೂ ಒಂದೊಂದು ರೀತಿಯ ಉಪಾಯ ಸೂಚಿಸಿದರು.

''ಕಾಡಿನ ಪರಿಸರದಿಂದ ಗಿಳಿ ದೂರವಾಗಬೇಕು''.

''ಅದರ ರೆಕ್ಕೆಪುಕ್ಕ ಕಾಲುಗಳನ್ನು ಕತ್ತರಿಸಬೇಕು''

''ಛೆ!ಛೆ! ಗಿಳಿಯ ಬಾಯಿಗೆ ಬೀಗ ಹಾಕಬೇಕು''

''ಉಪವಾಸ ಇಟ್ಟರೆ ಹೇಗೆ?

ಮಂತ್ರಿಗೆ ಯಾರ ಮಾತೂ ಸಮಾಧಾನ ತರಲಿಲ್ಲ.

ಕಡೆಗೂ ಕೊನೆಯ ಸಂಶೋಧಕನ ಸಲಹೆಯಿಂದ ಮಂತ್ರಿ ಉಲ್ಲಾಸಗೊಂಡ. ಕಣ್ಣರಳಿತು.

ಸಲಹೆಯಾದರೂ ಹೀಗಿತ್ತು-

''ಅರಮನೆಯಲ್ಲೊಂದು ಸೆರೆಮನೆಯನ್ನು ರಚಿಸಬೇಕು. ಸೆರೆಮನೆ ಪಾಠಶಾಲೆಯಾಗಬೇಕು''.

''ಹಾಗಂದರೆ''?

''ಹಾಗೆಂದರೆ ಸೆರೆಮನೆಗೆ ಸೆರೆಮನೆ, ಪಾಠಶಾಲೆಗೆ ಪಾಠಶಾಲೆ.''

''ಹೌದು, ಹೌದು. ಪಂಜರಶಾಲೆ... ಪಂಜರಶಾಲೆ''

ಎಲ್ಲ ಪಂಡಿತರೂ ದನಿಗೂಡಿಸಿದರು.

ಶಾಲೆ ಎಂದ ಮೇಲೆ ಕ್ರಮ ಇರಲೇಬೇಕಲ್ಲ. ಏನು ಕಲಿಸಬೇಕು? ಎಷ್ಟು ಕಲಿಸಬೇಕು? ಹೇಗೆ ಕಲಿಸಬೇಕು? ರಜೆಯ ದಿನಗಳು ಎಷ್ಟಿರಬೇಕು? ಪಂಡಿತ

ಮಹಾಶಯರೆಲ್ಲ ಮತ್ತೆ ತಲೆ ಕೆರೆದುಕೊಂಡರು. ಅಂತೂ ಒಮ್ಮತದಿಂದ ಒಪ್ಪಿಕೊಂಡ ಅಂಶಗಳಿಷ್ಟು.

ಅಕ್ಷರದಿಂದ ಆರಂಭಿಸಬೇಕು. ಶಾಸ್ತ್ರ, ಪುರಾಣ, ಆಗಮ, ಯೋಗ, ಸಂಗೀತ ಮುಂತಾದವುಗಳನ್ನು ಕಲಿಸುವ ವ್ಯವಸ್ಥೆ ಇರಬೇಕು.

ಅಳಿಯ ಮಂತ್ರಿಯೂ ತಲೆದೂಗಿದ. ಕೈತುಂಬ ರೊಕ್ಕ ಚೆಲ್ಲಿದ. ಶಾಲೆಯನ್ನು ಆರಂಭಿಸಲು ಕೆಲಸಗಳಾಗಬೇಕಲ್ಲ.

ಗಲ್ಲಿಗಲ್ಲಿಯಲ್ಲೆಲ್ಲಾ ಡಂಗುರ ಸಾರಿಸಲಾಯ್ತು. ಎಲ್ಲರ ಕಿವಿನೆಟ್ಟಗಾದವು. ಪಂಜರಶಾಲೆ ಕಟ್ಟುವ ಭಾಗ್ಯ ತಮ್ಮದಾಯಿತೆಂದು ಶಿಲ್ಪಿಗಳು, ಕಲಾವಿದರು, ಕಾರ್ಮಿಕರೆಲ್ಲ ಕುಣಿದಾಡಿದರು. ಮನ ಬಂದಂತೆ ಹಾಡಿದರು.

'ಲಿಂಗಣ್ಣಾ ವೆಂಕಣ್ಣಾ
ಕರಿಯಣ್ಣಾ ಕೆಂಪಣ್ಣಾ
ಎಲ್ಲರೂ ಬನ್ನಿರೋ ಅರಮನೆಗೆ|
ಬೆಳ್ಳಿಯ ಕೋಲಿನ
ಹೊನ್ನಿನ ಬಣ್ಣದ
ಗೂಡೊಂದು ಕಟ್ಟೋಣ ಗಿಳಿಮರಿಗೆ||

ಮಣ್ಣಿನ ಕಲ್ಲಿನ
ಹೂವಿನ ಹಾಸಿನ
ಗೂಡೊಂದ ಕಟ್ಟೋಣ ಬನ್ನಿರೋ||'

ರಾಜ್ಯದ ಮೂಲೆ ಮೂಲೆಗಳಿಂದ ಜಾಣರಾದ ಕೆಲಸಗಾರರು ನುಗ್ಗಿ ಬಂದರು. ಲಗುಬಗೆಯಿಂದ ಅರಮನೆಯ ಪರಿಕರಗಳನ್ನೆಲ್ಲ, ಬಳಸಿಕೊಂಡರು. ''ಪಂಜರ ಶಾಲೆ'' ಸಿದ್ಧವಾಯಿತು.



ಕುಶಲ ಕರ್ಮಿಗಳು ಪಂಜರ ನಿರ್ಮಿಸುತ್ತಿರುವುದು

ಮಂತ್ರಿಗಳು ಶಾಲೆಯನ್ನು ನೋಡಿದರು. ಅದರಲ್ಲಿ ಗಿಳಿಗೆ ಓದಲು, ಬರೆಯಲು, ನಗಲು, ಅಳಲು, ಹಾಡಲು, ಕುಣಿಯಲು ಬೇರೆ ಬೇರೆಯೇ ಕೋಣೆಗಳಿದ್ದವು. ಆದರೆ, 'ಎಲ್ಲಾ ಜಾಣ, ತುಸಾ ಕೋಣ' ಎನ್ನುವಂತೆ ಅದರಲ್ಲಿ ಮಲಗುವ ಕೋಣೆಯೇ ಪತ್ತೆ ಇರಲಿಲ್ಲ. ಹೀಗೇಕೆ ಎಂದು ವಿಚಾರಿಸಲಾಗಿ ಹಕ್ಕಿ ನಿದ್ದೆ ಮಾಡುತ್ತಾ ಅನಾಗರೀಕವಾಗಬಾರದೆಂದು ಹಾಗೆ ಮಾಡಲಾಗಿದೆ ಎಂದು ವಿವರಿಸಿದರು.

ಮಂತ್ರಿಗೆ ಸಂತೋಷವಾಯಿತು. ಪಂಜರಶಾಲೆಯ ಹೊಸ ರೀತಿ ಖುಷಿ ಕೊಟ್ಟಿತು. ಕೆಲಸಗಾರರೆಲ್ಲ ಬೊಕ್ಕಸದಿಂದ ಬೇಕೆಂಬಷ್ಟು ಬಹುಮಾನ ಪಡೆದರು.

ಹೊಗಳುಭಟರೆಲ್ಲ ಪಂಜರಶಾಲೆಯನ್ನು ಹೊಗಳಿದರು. ರಾಜನ ಬಗ್ಗೆ ಅಭಿಮಾನವಾಯಿತು.'ಪಂಜರವನ್ನು ಮತ್ತೆ ಮತ್ತೆ ನೋಡಿದರು. ಕಣ್ಣು ಇದ್ದುದಕ್ಕೆ ಸಾರ್ಥಕ ಎಂದರು.

ಅತ್ತ ತೆಗಳುಭಟರಿಗೆಲ್ಲ ಉರಿಯೋ ಉರಿ. ತಮ್ಮ ಹಣೆಬರಹವನ್ನು ತಾವೇ ಶಪಿಸಿಕೊಂಡರು.

'ಇದು ಗಿಳಿಯಣ್ಣನ ಅರಮನೆಯೋ
ಅಥವಾ ಅಳಿಯಣ್ಣನ ಸೆರೆಮನೆಯೋ'
ಎಂದು ಗೇಲಿ ಮಾಡಿದರು.

೪

ಅರಸನ ಸಭೆ ಮತ್ತೊಮ್ಮೆ ಸೇರಿತು. ಪಂಡಿತರೆಲ್ಲ ತಮ್ಮ ತಮ್ಮ ಆಸನಗಳಲ್ಲಿ ಕುಳಿತಿದ್ದಾರೆ. ವಿದ್ಯಾಮಂತ್ರಿಯಾದ ಅಳಿಯನೂ ಕುಳಿತಿದ್ದ. ಸಭಾಸದರನ್ನು ಕುರಿತು ಮುಂದಿನ ಕೆಲಸಗಳ ಬಗ್ಗೆ ಮಾತನಾಡಿದ.

''ವಿದ್ಯಾಗುಣ ಸಂಪನ್ನರೇ, ಗಿಳಿಗಿಂತಲೂ ಅದರ ಆತ್ಮ ಬಹಳ ಮುಖ್ಯ. ಆದ್ದರಿಂದ ಅಂತರಂಗ ಉದ್ಧಾರಮಾಡುವ ಕ್ರಮವನ್ನೆಲ್ಲ ರೂಪಿಸಬೇಕು. ಕಾಡುಗುಣಗಳು ಮರೆಯಾಗಿ ನಾಡಗುಣ ಮೊಳೆಯಬೇಕು. ಈ ಹಕ್ಕಿ ಉಳಿದೆಲ್ಲ ಹಕ್ಕಿಗಳಿಗೂ ಮಾದರಿಯಂತಿರಬೇಕು. ಹಾಗಾದಲ್ಲಿ ರಾಜ್ಯೋತ್ಸವ ಪ್ರಶಸ್ತಿ ಖಂಡಿತ.''

ಆಗಲೇ ಹಿರಿಯ ಪಂಡಿತ ತನ್ನವರಿಗೆಲ್ಲ ಸೂಚನೆ ನೀಡಿದ.

''ನೋಡಿ, ಪಾಠಕ್ರಮ ಪ್ರಶಸ್ತಿ ತರುವ ಹಾಗಿರಬೇಕು. ಏನಿಲ್ಲದಿದ್ದರೂ ವೇದಗಳ ಸಾರವಿರಲಿ. ಪುರಾಣಗಳನ್ನು ಮರೆಯಬೇಡಿ. ಉಪನಿಷತ್ತನ್ನೂ ಕೈಬಿಡಬಾರದು.''

ಪಂಡಿತರೆಲ್ಲ ನಾನಾ ಭಾಷೆಗಳ ಪುಸ್ತಕಗಳನ್ನು ತಿರುವಿ ತಿರುವಿ ನೋಡಿದರು. ಅಂತೂ ಇಂತೂ ಪಾಠಕ್ರಮ ಸಿದ್ಧವಾಯಿತು. ಆತ್ಮಕ್ಕೆ ಸಾವಿಲ್ಲ, ಸತ್ಯವೇ ತಾಯಿ ತಂದೆ, ಜೀವನವೊಂದು ಮಾಯೆ. ಹೆದರಿದರೆ ಮಾತ್ರ ಬುದ್ಧಿಬರಲು ಸಾಧ್ಯ! ಎಲ್ಲ ದೊಡ್ಡ ದೊಡ್ಡ ಮಾತುಗಳೇ.

ಪಂಜರಶಾಲೆಯ ಆರಂಭೋತ್ಸವ ಕೂಡ ವೈಭವದಿಂದ ನೆರವೇರಿತು. ನಾಡಿಗೆ ನಾಡೇ ಮೆರವಣಿಗೆಯಲ್ಲಿ ಕೂಡಿಕೊಂಡಿತು.

'ಕಲಿಕೆಯೇ ಸ್ವರ್ಗ, ದಡ್ಡತನವೇ ನರಕ,
ಕಲಿತು ಬಾಳಿರಿ, ಕಲೆತು ಹಾಡಿರಿ''

ಎನ್ನುವ ಕೂಗು ಮುಗಿಲು ಮುಟ್ಟುತ್ತಿತ್ತು.

ಕೈಲಾಗದವನು ಮೈ ಪರಚಿಕೊಂಡಂತೆ ತೆಗಳು ಭಟರೆಲ್ಲ ಕೈ ಕೈ ಉಜ್ಜಿಕೊಂಡರು. ಹೊಟ್ಟೆಕಿಚ್ಚು ಹೊಗೆಯಾಡಿತು. ಗಿಳಿಮರಿಯ ಸುಖ ಕಂಡು ಕಣ್ಣು ಕೆಂಪಾಯಿತು. ತಮ್ಮಷ್ಟಕ್ಕೆ ತಾವೇ ಹಲುಬತೊಡಗಿದರು.

'ದಿನ ಕಳೆದಂತೆಲ್ಲ ರಾಯರ ಕುದುರೆ ಕತ್ತೆಯಾದಂತೆ
ಗಿಳಿ ಪಿಳ್ಳೆಯೂ ಪಂಡಿತನಾದರೆ ಏನು ಗತಿ!?'

ವೇಷಾಂತರದಿಂದ ಬಂದ ರಾಜ-ಮಂತ್ರಿಗಳು ತೆಗಳುಭಟರ ಮಾತಿನಿಂದ ಚಿಂತೆಗೆ ಒಳಗಾದರು. ಅಳಿಯ ಮಾತ್ರ ಅಂಜಲಿಲ್ಲ. ''ನಾಯಿ ಬೊಗಳಿದರೆ ದೇವಲೋಕ ಹಾಳಾಗುವುದೇ''? ಎಂದು ರಾಜನಿಗೆ ಧೈರ್ಯ ತುಂಬಿದ. ಗಿಳಿಗಾಗಿ ರೂಪಿಸಿದ ಪಾಠಕ್ರಮವನ್ನು ಕಣ್ಣಾರೆ ಕಾಣು ಎಂದು ನಿವೇದಿಸಿಕೊಂಡನು.

೫

ಬಹಿರಂಗ ಸಭೆ ಸೇರಿತು. ಅಳಿಯ, ಮಂತ್ರಿ, ಪರಿವಾರದವರು, ಕಲಾವಿದರು, ಶಿಲ್ಪಿಗಳು, ಪಂಡಿತರು, ವಾಚಾಳಪುರದ ನಾಗರಿಕರು, ಕಡೆಗೆ ಹೊಗಳುಭಟರು ಮತ್ತು ತೆಗಳುಭಟರೆಲ್ಲ ತುಂಬಿತುಳುಕಿದರು.

ಹಿರಿಯ ಪಂಡಿತ ಅಳಿಯ ಮಂತ್ರಿಯ ಸನ್ನೆಯಿಂದ ಎದ್ದು ನಿಂತನು. ವರದಿಯನ್ನು ವಿವರವಾಗಿ ನಿರೂಪಿಸತೊಡಗಿದನು.

ಹಿರಿಯ ಪಂಡಿತರ ವರ್ಣನೆಯಿಂದ ನೆರೆದವರೆಲ್ಲ ಕಕ್ಕಾಬಿಕ್ಕಿಯಾದರು. 'ಆಹಾ... ಅದುಬುತ ಅದುಬುತ' ಎಂದು ಉದ್ಗರಿಸಿದರು. ಮಹಾರಾಜರ ಗುಣಗಾನ ಮಾಡಿದರು.

ರಾಜನಿಗಾದರೋ ಒಳಗೊಳಗೇ ಸಂತೋಷ. ತನ್ನ ಈ ನವೋದಯ ಶಾಲೆಯ ರೀತಿಯಿಂದ ಜೀವನ ಸಾರ್ಥಕವಾಯಿತು ಎಂದು ಭಾವಿಸಿದ. ತೆಗಳು ಭಟರ ಚುಚ್ಚುನುಡಿಗಳಿಂದ ಸತ್ಯಸುಳ್ಳಾಗುವುದಿಲ್ಲ ಎಂದು ಅರಿತುಕೊಂಡ. ಆರೋಗ್ಯವಂತ ಬೀಜಗಳಿಂದ ಆರೋಗ್ಯಕರ ಸಸಿಗಳೇ ಮೊಳೆಯುತ್ತವೆ ಅಲ್ಲವೇ?

ಪಂಡಿತ ಮಹಾಶಯರೆಲ್ಲ ಮಹಾರಾಜನಿಗೆ ಗಿಳಿಯ ಪಾಠಕ್ರಮವನ್ನು ಕುರಿತು ವಿವರವಾಗಿ ಹೇಳಿದರು. ಅಕ್ಷರ ಮಾಲೆಯಿಂದ ಹಿಡಿದು ಶ್ಲೋಕಗಳವರೆಗೂ ಸ್ವತಃ ಓದಿ ತೋರಿಸಿದರು. ಗಾಯಕಿಯರು ತಾವು ಕಲಿಸಿದ ಸ್ವರಗಳನ್ನು ತಾವೇ ಸ್ವತಃ ಹಾಡಿ ತೋರಿಸಿದರು. ನರ್ತಕಿಯರು ಕಾಂಚೀಪುರದಿಂದ ಬಂದು ಗಿಳಿಗೆ ನಾಟ್ಯ ಕಲಿಸಿದ ಬಗೆಯನ್ನು ನರ್ತಿಸಿ ತೋರಿದರು. ಸಮಸ್ತ ಜನರೂ ಗೌರವಭಾವದಿಂದ ದನಿಗೈದರು.

‘‘ರಾಜನೇ ನಿಜವಾದ ದೇವತೆ’’
‘‘ಅಳಿಯಂದಿರೂ ದೇವರೇ’’
‘‘ಗಿಳಿ ಕೂಡ ದೇವತೆಯೇ!’’

ಜನಸಮೂಹವೆಲ್ಲ ವಿದ್ವಾಂಸರ ಕ್ರಮದಿಂದ ಹುಬ್ಬು ಹಾರಿಸಿದರು. ಅರಸ ತನ್ನ ಅಳಿಯಮಂತ್ರಿಯ ಸಾಹಸಕ್ಕೆ ಬೆರಗಾದ. ಇಂತಹ ಗಂಡನನ್ನು ಪಡೆದ ಮಗಳ ಭಾಗ್ಯವೇ ಭಾಗ್ಯ ಎಂದು ಬೀಗತೊಡಗಿದ. ಆನಂದದ ಕಣ್ಣೀರು ಸುರಿಯುತ್ತಿತ್ತು.

ಡಂಗುರದವರಿಗೆ ಅದೇ ಕೆಲಸ. ಮತ್ತೆ ದಾರಿಯುದ್ದಕ್ಕೂ ಸಾರುತ್ತಾ ಹೋದರು.

‘‘ಗಿಳಿಪಾಠದ ಬಗ್ಗೆ ತೆಗಳುಭಟರ ಅಪಪ್ರಚಾರಕ್ಕೆ ಯಾರೂ ಕಿವಿಗೊಡಬೇಡಿ. ಕೇಳಿರಿ... ಕೇಳಿರಿ... ಗಿಳಿರಾಮನ ಸೌಭಾಗ್ಯವನ್ನು ಹಾಡಿ ಹೊಗಳಿರಿ...’’

೭

ಮುದ್ದುಗಿಳಿಮರಿ ಎಂದೂ ಕಾಣದ ರಾಜಸತ್ಕಾರದಿಂದ ಬಳಲಿ ಬೆಂಡಾಗಿದೆ. ಬೆಕ್ಕಿಗೆ ಆಟವಾದರೆ ಇಲಿಗೆ ಪ್ರಾಣ ಸಂಕಟ. ತನ್ನವರಿಂದ ದೂರವಾದ ಗಿಳಿಗೆ ನೋವು-ಯಾತನೆ. ಅಯ್ಯೋ.... ಅಯ್ಯೋ.... ಎನ್ನುವಂತೆ ಕೂಗುತ್ತದೆ. ಸಖಿಯರಿಗೆ ಮಾತ್ರ ಗಿಳಿಮರಿಯನ್ನು ಉಪಚರಿಸುವ ಆಸೆ. ಹಿಗ್ಗಿನಿಂದ ಹಾಡುತ್ತಾರೆ. ಕುಣಿದು

ಕುಪ್ಪಳಿಸುತ್ತಾರೆ. ಗಿಳಿಮರಿಯ ಜೊತೆ ವಿನೋದವಾಡುತ್ತಾರೆ' ಇಂದ್ರ ಬೇಕೋ, ಚಂದ್ರ ಬೇಕೋ, ಕಥೆ ಕೇಳ್ತೀಯಾ? ಓದು ಕಲಿ ಮರಿ. ಪಾಯಸ ತಿಂತೀಯ?' ಎನ್ನುತ್ತಾ ಸಖಿಯರು ಚಕ್ಕಂದವಾಡುತ್ತಾರೆ. ಮೊದಲೇ ಬಳಲಿದ್ದ ಗಿಳಿಮರಿಗೆ ಹಿಂಸೆಯಾಗುತ್ತದೆ. ಅದರ ಪಾಡು ಅದಕ್ಕಾಗಿದೆ. ಆಟವೂ ಬೇಡ, ಪಾಠವೂ ಬೇಡ, ಊಟವೂ ಬೇಡ. ಮತ್ತೆ ಮತ್ತೆ ಟೇಂ.... ಟೇಂ.... ಕೂಗುತ್ತದೆ. ಕೊನೆಗೆ ಆ ಸದ್ದೂ ಇಲ್ಲ. ನಿದ್ದೆ ಹೋಗುತ್ತದೆ. ಆಯಾಸಗೊಂಡ ದೇಹಕ್ಕೆ ವಿಶ್ರಾಂತಿ ಬೇಡವೇ?

ಸಖಿಯರೂ ನಿದ್ರಿಸಿದರು. ಅವರನ್ನು ಎಚ್ಚರಿಸಲು ಬಂದವರೂ ತಾವಿನ್ನು ಮಾಡುವುದೇನು ಎಂದು ನಿದ್ದೆಗೆ ಶರಣಾದರು.

ಗಿಳಿಗೆ ಸೊಂಪಾದ ನಿದ್ರೆ. ಕನಸಿನ ಪ್ರಪಂಚದಲ್ಲಿ ಓಲಾಡತೊಡಗಿತು.

ತನ್ನ ಬಳಗದ ಅಕ್ಕ, ಅಣ್ಣ, ಚಿಕ್ಕಪ್ಪ, ಚಿಕ್ಕಮ್ಮ, ಅಮ್ಮ ಇವರೊಂದಿಗೆ ನೆಮ್ಮದಿಯಿಂದ ವಿಹರಿಸಿದಂತೆ ಕನಸು ಕಂಡಿತು. ಕನಸಿನಿಂದ ಗಿಳಿಗೆ ಖುಷಿಯೋ ಖುಷಿ. ಪಂಜರದ ಸಲಾಕೆಗಳಿಗೆ ತಲೆ ಕುಟ್ಟಿಕೊಂಡು ಅಡ್ಡ ಬಿದ್ದಿತು.

ಮಾರನೆಯ ದಿನ ಬೆಳ್ಳಂಬೆಳಗಾಗಿದೆ. ಗಿಳಿಗೆ ಮಾತ್ರ ಬೆಳಗಾಗಿರಲಿಲ್ಲ. ಬಿದ್ದ ಹಾಗೇ ಬಿದ್ದುಕೊಂಡಿತ್ತು. ಮಾತಿಲ್ಲ, ಕತೆಯಿಲ್ಲ. ಶಾಲೆಯ ಗಂಟೆ ಬಾರಿಸಿತು. ಚಡಪಡಿಸಿ ಎದ್ದ ಸಖಿಯರಿಗೆ ಗಾಬರಿಯಾಯ್ತು. ಸುದ್ಧಿ ಬಾಯಿಂದ ಬಾಯಿಗೆ ಹರಡಿತು. ರಾಜ್ಯದ ತುಂಬೆಲ್ಲ ಒಂದೇ ಪ್ರಶ್ನೆ. ''ಗಿಳಿಮರಿಗೆ ಏನಾಯಿತು? ಗಿಳಿಮರಿಗೆ ಏನಾಯಿತು?''. ಹೊಗಳುಭಟರೂ, ತೆಗಳುಭಟರೂ ಕಿವಿಕಿವಿಯೊಳಗೆ ಆಡಿಕೊಂಡರು. ಸುದ್ಧಿಯನ್ನು ಗುದ್ದಿದರು. ಯುದ್ಧಕ್ಕಿಂತಲೂ ಸುದ್ಧಿ ಅಪಾಯಕಾರಿ ಅಂತಾರಲ್ಲ, ಹಾಗೆ.

ಸುದ್ಧಿ ಸಾವಿರವಾಗಿ ರಾಜನವರೆಗೂ ತಲುಪಿತು. ಇಷ್ಟಾದರೂ ನಿಜ ಏನೆಂದು ರಾಜನಿಗೆ ತಿಳಿಯಲಿಲ್ಲ. ಅಳಿಯಮಂತ್ರಿಗೆ ಹೇಳಿ ಕಳಿಸಿದ. ರಾಜನ ಮನಸ್ಸು ಕಲಕಿಹೋಗಿತ್ತು. ಒಳ್ಳೆಯದಾದರೆ ಯಾರೂ ಮಾತಾಡುವುದಿಲ್ಲ. ಕೆಟ್ಟದ್ದಾದರೆ ಮಾತ್ರ

ಆಳಿಗೆ ಒಂದೊಂದು ತೆರ ಮಾತನಾಡುತ್ತಾರೆ. ಮಾತು ಅಂದರೆ ಹೇಗೆ? ಉರಿಯುವ ಕೊಳ್ಳಿ ನುರಿದ ಹಾಗೆ. ''ಗಿಳಿ ಧ್ಯಾನ ಮಾಡುತ್ತಿದೆಯಂತೆ'', ''ಪುಸ್ತಕವನ್ನೂ ತಿನ್ನೋದಿಲ್ಲವಂತೆ!'' ''ಗಿಳಿಮರಿ ಸತ್ತೇ ಹೋಗಿರಬೇಕು'' ''ಸತ್ತ ಮೇಲೆ ಹಾರುವುದುಂಟೇ?''.... ತಲೆಹರಟೆ ಮಾತಿಗೆ ಯಾರಿಗಿಂತ ಯಾರೂ ಕಡಿಮೆ ಇರಲಿಲ್ಲ.

ಅಳಿಯಮಂತ್ರಿ ಮಾತ್ರ ಗಟ್ಟಿಧ್ವನಿಯಲ್ಲಿ ನುಡಿದ,

''ಗಿಳಿಮರಿ ಈಗ ಅಕ್ಷರ ಕಲಿತಿದೆ. ಅಡಿಯಿಂದ ಮುಡಿಯವರೆಗೂ ಸಂಪನ್ನವಾಗಿದೆ. ಕಾಡುಗುಣ ಇಲ್ಲವೇ ಇಲ್ಲ''.ಅವನ ಮಾತಿನಲ್ಲಿ ತನ್ನದೊಂದು ಸಾಧನೆ ಎಂಬ ಭಾವವಿತ್ತು.

ರಾಜನಿಗೆ ನಿರಾಳವಾಯಿತು. ಸಂತೋಷಪಟ್ಟ. ಹಾಗಾದರೆ ಗಿಳಿಮರಿ ಇನ್ನು ಸ್ವತಂತ್ರವಾಯಿತು ತಾನೆ? ಮರು ಪ್ರಶ್ನೆ ಹಾಕಿದ. ಮಂತ್ರಿಗೆ ಈಗ ಮಾತ್ರ ತಾವೇ ತೋಡಿಕೊಂಡ ಬಾವಿಗೆ ಬಿದ್ದಂತಹ ಅನುಭವವಾಯಿತು. ಆದರೂ ಏನೂ ಅಪರಾಧ ನಡೆದಿಲ್ಲವೆಂಬಂತೆ ಬಿಡಿಸಿ ಬಿಡಿಸಿ ನಿರೂಪಿಸಿದ.

ಗಿಳಿಮರಿ ಮೊದಲಿನಂತೆ ಹಾರದು, ಕೂಗದು, ಕಾಳುಕಡ್ಡಿ ತಿನ್ನುವುದಿಲ್ಲ. ಗಿಳಿಯ ಅವಿದ್ಯೆಗೆ ಅವೇ ಕಾರಣವಾಗಿದ್ದವು. ಆದ್ದರಿಂದ ಈಗ ಗಿಳಿಮರಿ ಸಕಲಗುಣ ಸಂಪನ್ನವಾಗಿದೆ.

ತನ್ನ ಅಳಿಯನ ಸಾಧನೆಯನ್ನು ಅರಿತ ರಾಜನಿಗೆ ಹೆಮ್ಮೆ ಎನ್ನಿಸಿತು. ಇನ್ನು ಕಾಡಿನ ಜೀವನಕ್ಕೆಲ್ಲ ನಾಗರೀಕತೆ ಕಲಿಸುವಂತಾಗಬೇಕು.

ರಾಜನ ಆಸೆಯಂತೆ ಸೇವಕರು ಗಿಳಿಮರಿಯನ್ನು ತರುತ್ತಾರೆ. ಅದಕ್ಕೆ ನಿಲ್ಲಲೂ ಶಕ್ತಿ ಇಲ್ಲ. ಕೂಗಲು ಮೊದಲೇ ಆಗದು. ರಾಜ ಅದರ ತಲೆಯನ್ನು ಮುದ್ದಿನಿಂದ ನೇವರಿಸಿ ನುಡಿದ. ವಾಚಾಳಪುರದ ಗುಣಗಳನ್ನು ದೂರ ಬಹುದೂರದವರೆಗೂ ಹಬ್ಬಿಸು ಎಂದು ಹಾರೈಸಿದ. ಹೆಣ್ಣುಮಕ್ಕಳು ಗಂಡನ ಮನೆಗೆ ಹೊರಟಾಗ ಹಾರೈಸುವುದಿಲ್ಲವೇ ಹಾಗೆ.

ಆದರೆ ಈಗಾಗಲೇ ಎಚ್ಚರತಪ್ಪಿದ್ದ ಗಿಳಿಮರಿ ದೊಪ್ಪನೆ ಕೆಳಗೆ ಬಿತ್ತು. ಪಂಜರದಲ್ಲಿ ಬೆಳೆದ ಹಕ್ಕಿ. ಆದಕ್ಕೆ ಗತಿ ಯಾರು? ಹೇಳಿ. ಅರಮನೆಯ ಆವರಣದಲ್ಲಿ ಸದ್ದೇ ಇಲ್ಲ.



ಪಂಜರದಲ್ಲಿ ಸತ್ತಂತೆ ಬಿದ್ದಿರುವ ಗಿಳಿ

ವಸಂತ ಕಾಲದ ಮತ್ತೊಂದು ಬೆಳಗು. ಎಲ್ಲೆಲ್ಲೂ ಗಿಳಿಗಳ ದನಿ. ಎಳೆಬಿಸಿಲಿನ ಹದವಾದ ಸುಖ. ಅದೇ ರಾಜವನದಲ್ಲಿ ಗಿಳಿಬಳಗ ಯಾರ ಹಂಗೂ ಇಲ್ಲದೆ ನಲಿಯುತ್ತಿದೆ. ಪಂಜರಶಾಲೆಯಲ್ಲಿ ಕಲಿತು ನರಳಿದ ಈ ಗಿಳಿಮರಿ ಸಾವರಿಸಿಕೊಂಡು ಏಳುತ್ತದೆ. ತಾನು... ತನ್ನವರು ಎಂಬುದು ದೊಡ್ಡದು. ತನ್ನ ಸಂಕುಲವನ್ನು ಕಂಡ ಕೂಡಲೇ ಕೂಗಲು ಹವಣಿಸಿತು. ಏಳುತ್ತ, ಬೀಳುತ್ತ, ರೆಕ್ಕೆಕೊಡವಿಕೊಳ್ಳುತ್ತ ನಿಧಾನವಾಗಿ ತನ್ನ ತಂಡವನ್ನು ಸೇರಿಕೊಂಡಿತು. ಜೀವ ಸಂಚಾರವಾಯಿತು. ಮೈಮನಗಳಲ್ಲಿ ಚೇತನ ತುಂಬಿತು.

ಏಳೇಳು ಜನ್ಮದಲ್ಲೂ ಈ ಮನುಷ್ಯರ ಸಹವಾಸ ಬೇಡಪ್ಪ. ನನ್ನ ಶತ್ರುಗಳಿಗೂ ಇಂತಹ ಕಷ್ಟ ಬಾರದಿರಲಿ. ಎಂದು ದೇವರಲ್ಲಿ ಪ್ರಾರ್ಥಿಸಿತು ಗಿಳಿಮರಿ.



ರಾಜನು ಗಿಳಿಮರಿಯನ್ನು ಹಾರಿ ಬಿಡುತ್ತಿರುವುದು

ಕೊನೆಗೂ ನಾಗರಿಕರಿಂದ ಪಾರಾದೆನಲ್ಲ ಎಂದು ಅದಕ್ಕೆ ಹಿಗ್ಗೋ ಹಿಗ್ಗು. ''ಬೀಸುವ ದೊಣ್ಣೆ ತಪ್ಪಿದರೆ ನೂರು ವರ್ಷ ಆಯಸ್ಸು'' ಅಂತಾರಲ್ಲ ಹಾಗೆ. ಟೇಂ.... ಟೇಂ.... ಗುಟ್ಟುತ್ತಾ ಮುದ್ದಿನ ಗಿಳಿರಾಮ ತನ್ನವರೊಂದಿಗೆ ಸೇರಿಕೊಂಡಿತು. ಗಿಳಿಯಿಂದ ಕಾಡು, ಕಾಡಿನಿಂದ ಗಿಳಿ, ಹಸಿರಿನ ಹರವಿನಿಂದ ಕಂಗೊಳಿಸಿತು.

ಅಮ್ಮ ಕಥೆ ಹೇಳಿದ್ದೇ ಹೇಳಿದ್ದು. ಮಕ್ಕಳು ಮಾತ್ರ ಮಲಗಿ ಎಷ್ಟೋ ಸಮಯ ಕಳೆದಿತ್ತು. ನಿದ್ದೆ ಮಾಡುತ್ತಿದ್ದ ಕರುಳ ಕುಡಿಗಳ ಮುದ್ದುಮೊಗವನ್ನು ಅಮ್ಮ ಎಷ್ಟೋ ಹೊತ್ತು ನೋಡುತ್ತಲೇ ಇದ್ದಳು. ಪ್ರೀತಿ ನದಿಯಂತೆ.



ನಮ್ಮ ಬಹುಸಂಖ್ಯಾತ ಸಮುದಾಯ ಅನಕ್ಷರಸ್ಥರೇ ಹೊರತು ಅವಿದ್ಯಾವಂತರಲ್ಲ. ನೃಪತುಂಗ ಹೇಳುವಂತೆ ಅವರು "ಚದುರರ್ ನಿಜದಿಂ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್". ಅನುಭವದಲ್ಲಿ, ವಿವೇಕದಲ್ಲಿ, ವ್ಯವಹಾರದಲ್ಲಿ, ತಿಳುವಳಿಕೆಯಲ್ಲಿ ಆ ಜನ ಚದುರರು. ಹೀಗೆಂದು ಅವರನ್ನು ಅಕ್ಷರದಲಿತರನ್ನಾಗಿಯೂ ಉಳಿಸುವಂತಿಲ್ಲ. ಅವರಲ್ಲಿ ಅಕ್ಷರ ಕಲಿಯುವ ಸಾಮರ್ಥ್ಯವಿದೆ. ಕಲಿಸುವ ಹೊಣೆ ಸರ್ಕಾರಗಳ, ವಿಶ್ವವಿದ್ಯಾಲಯಗಳ ಮೇಲಿದೆ. ಈ ನಿಟ್ಟಿನಲ್ಲಿ ದೇಶದಾದ್ಯಂತ ಸಾಕ್ಷರತಾ ಆಂದೋಲನ ನಡೆಯುತ್ತಿದೆ. ಆದರೆ ಈ ಅಕ್ಷರ ಸಂಸ್ಕೃತಿಯ ಆಂದೋಲನದಲ್ಲಿ ಕಲಿತವರಿಗೆ ಮತ್ತು ಕಲಿಯುವವರಿಗೆ ಉತ್ತಮ ಗುಣಮಟ್ಟದ ಪುಸ್ತಕಗಳ ಅವಶ್ಯಕತೆ ಇದೆ. ಕಲಿತವರು ಮರೆಯದಂತೆ, ಕಲಿಕೆಯನ್ನು ಮುಂದುವರಿಸುವಂತೆ ನೋಡಿ ಕೊಳ್ಳುವುದು ಎಲ್ಲರ ಕರ್ತವ್ಯ.

ಕನ್ನಡ ವಿಶ್ವವಿದ್ಯಾಲಯವು ನಾಡಿನ ಹಲವು ವಿದ್ವಾಂಸರೊಂದಿಗೆ ಸೇರಿ ನಡೆಸಿದ ಒಂದು ಸಾಮೂಹಿಕ ಪ್ರಯತ್ನದ ಫಲವಾಗಿ ಈ ಪುಸ್ತಕ ರೂಪತಾಳಿದೆ. ನವಸಾಕ್ಷರರು ಈ ಪುಸ್ತಕವನ್ನು ಪ್ರೀತಿಯಿಂದ ಸ್ವೀಕರಿಸುತ್ತಾರೆಂದು ನಂಬಿದ್ದೇವೆ. ಈ ಯೋಜನೆಯ ಯಶಸ್ಸಿಗೆ ಕಾರಣರಾಗಿರುವ ಉನ್ನತ ಸಲಹಾ ಸಮಿತಿ ಹಾಗೂ ಸಂಪಾದಕ ಸಮಿತಿಯ ಸದಸ್ಯರಿಗೆ, ಲೇಖಕರಿಗೆ, ಕಲಾವಿದರಿಗೆ ಹಾಗೂ ಈ ಯೋಜನೆಯಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ನಮ್ಮೊಡನೆ ಪಾಲ್ಗೊಂಡವರೆಲ್ಲರಿಗೂ ನಮ್ಮ ಹೃತ್ಪೂರ್ವಕವಾದ ವಂದನೆಗಳು. ನಮ್ಮ ವಿಶ್ವವಿದ್ಯಾಲಯದ ಮೇಲೆ ವಿಶ್ವಾಸವಿಟ್ಟು ಇಂತಹ ಒಂದು ಗುರುತರವಾದ ಯೋಜನೆಯನ್ನು ವಹಿಸಿಕೊಟ್ಟ ಲೋಕಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀ ಲೂಕೋಸ್ ವಲ್ಲತ್ತರೈ ಅವರಿಗೆ ನನ್ನ ಕೃತಜ್ಞತೆಗಳು. ಓದುಗರು ಈ ಪುಸ್ತಕದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ತಿಳಿಸಿದರೆ ನಮ್ಮ ಪಠ್ಯಪುಸ್ತಕ ರಚನೆಗೆ ಉಪಯೋಗವಾಗುತ್ತದೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು